

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 78 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶಶೀಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 07–12–2020 |

| | ಪ್ರಶ್ನೆ | ಉತ್ತರ |
|---|---|---|
| (ಅ) | ರಾಯಚೂರು ನೂತನ ವಿಶ್ವವಿದ್ಯಾಲಯ ಯಾವಾಗ ಪ್ರಾರಂಭವಾಗಿದೆ; ಈ ವಿಶ್ವವಿದ್ಯಾನಿಲಯವು ಸ್ವಂತ ಕಟ್ಟಡವನ್ನು ಹೊಂದಿದೆಯೇ; (ವಿವರವಾದ ಮಾಹಿತಿ ನೀಡುವುದು); | ರಾಯಚೂರು ವಿಶ್ವವಿದ್ಯಾನಿಲಯವನ್ನು ನೂತನವಾಗಿ ದಿನಾಂಕ:01.08.2020 ರಿಂದ ಜಾರಿಗೆ ಬರುವಂತೆ ಸ್ಥಾಪಿಸಲಾಗಿದೆ. ರಾಯಚೂರು ವಿಶ್ವವಿದ್ಯಾನಿಲಯವು ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರವಾಗಿರುವ ರಾಯಚೂರು ಜಿಲ್ಲೆಯ ಯರಗೇರಾ ಗ್ರಾಮದಲ್ಲಿ ಕಾರ್ಯನಿರ್ವಹಿಸುತ್ತಿದೆ. |
| (ಆ) | ಈ ವಿಶ್ವವಿದ್ಯಾನಿಲಯಕ್ಕೆ ಸರಕಾರದಿಂದ ಮಂಜೂರಾದ ಜಮೀನು ಎಷ್ಟು; ಈ ವಿ.ವಿ.ಯ ವ್ಯಾಪ್ತಿ ಎಷ್ಟು ಹಾಗೂ ಸರಕಾರದಿಂದ ಇನ್ನುಳಿದ ಜಮೀನನ್ನು ಯಾವಾಗ ಒದಗಿಸಲಾಗುವುದು; | ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರವಾಗಿರುವ ರಾಯಚೂರು ಜಿಲ್ಲೆಯ ಯರಗೇರಾ ಗ್ರಾಮದಲ್ಲಿ ಈಗಾಗಲೇ 250 ಎಕರೆ ವಿಸ್ತೀರ್ಣದ ಜಮೀನು ಇದ್ದು, ಈ ಸ್ನಾತಕೋತ್ತರ ಕೇಂದ್ರವು ನೂತನವಾಗಿ ಸ್ಥಾಪಿಸಲಾದ ರಾಯಚೂರು ವಿಶ್ವವಿದ್ಯಾನಿಲಯದ ಮುಖ್ಯ ಆವರಣವಾಗಲಿದೆ, ಈ ಜಮೀನನ್ನು ಅಧಿಕೃತವಾಗಿ ರಾಯಚೂರು ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸುವ ಪ್ರಕ್ರಿಯೆ ನಡೆಯುತ್ತಿದೆ. ಹೊಸದಾಗಿ ಜಮೀನನ್ನು ಮಂಜೂರು ಮಾಡಿರುವುದಿಲ್ಲ ಹಾಗೂ ಹೆಚ್ಚುವರಿಯಾಗಿ ಜಮೀನನ್ನು ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| (ಇ) | ಸದರಿ ವಿಶ್ವವಿದ್ಯಾನಿಲಯದಲ್ಲಿ ಎಲ್ಲಾ ಮೂಲಭೂತ ಸೌಲಭ್ಯಗಳು ಇವೆಯೇ; ಹಾಗಾದರೆ, ಇಲ್ಲಿಯವರೆಗೆ ಸರಕಾರದಿಂದ ಒದಗಿಸಿದ ಅನುದಾನ ಎಷ್ಟು; | ನೂತನವಾಗಿ ಸ್ಥಾಪಿಸಲಾದ ರಾಯಚೂರು ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸಲಾಗುವ ಯರಗೇರಾ ಗ್ರಾಮದ 250 ಎಕರೆ ಜಮೀನು ಈಗಾಗಲೇ ಆಡಳಿತ ಕಛೇರಿ, ತರಗತಿ ಕೊಠಡಿ, ಕಾರ್ಯನಿರತ ಮಹಿಳೆಯರ ವಸತಿ ನಿಲಯ, ವಿದ್ಯಾರ್ಥಿನಿಲಯ, ಗ್ರಂಥಾಲಯ ಕಟ್ಟಡ, ಅತಿಥಿ ಗೃಹ ಮತ್ತು ಆಡಿಟೋರಿಯಂ ಕಟ್ಟಡಗಳನ್ನು ಒಳಗೊಂಡಿದೆ. ರಾಯಚೂರು ವಿಶ್ವವಿದ್ಯಾನಿಲಯಕ್ಕೆ ಇಲ್ಲಿಯವರೆಗೆ ರೂ. 220.00 ಲಕ್ಷ ಅನುದಾನವನ್ನು ಸರ್ಕಾರವು ಒದಗಿಸಿದ್ದು, ಸದರಿ ಅನುದಾನವನ್ನು ಗುಲ್ಬರ್ಗ ವಿಶ್ವವಿದ್ಯಾನಿಲಯದ ಲೆಕ್ಕಶೀರ್ಷಿಕೆಯಡಿ ಬಿಡುಗಡೆ ಮಾಡಲಾಗಿದೆ. |
| (ಈ) | ಸದರಿ ವಿಶ್ವವಿದ್ಯಾಲಯದಲ್ಲಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ನೇಮಕ ಮಾಡಲಾಗಿದೆಯೇ; (ವಿವರವಾದ ಮಾಹಿತಿ ನೀಡುವುದು) | ಇಲ್ಲ. |
| (ಉ) | ಈ ವಿಶ್ವವಿದ್ಯಾಲಯದಲ್ಲಿ ಬೋಧಿಸುವ ಸ್ನಾತಕ, ಸ್ನಾತಕೋತ್ತರ ವಿಷಯಗಳು ಯಾವುವು? | ಪ್ರಸ್ತುತ ರಾಯಚೂರು ವಿಶ್ವವಿದ್ಯಾಲಯವನ್ನು ಹೊಸದಾಗಿ ಸ್ಥಾಪಿಸಿರುವುದರಿಂದ, ಇನ್ನೂ ಯಾವುದೇ ನಿರ್ಧಾರ ತೆಗೆದುಕೊಂಡಿರುವುದಿಲ್ಲ. |

ಸಂಖ್ಯೆ: ಇಡಿ 72 ಯುಜಿವಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು
(ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)